ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಆಗಸ್ಟ 2019ರ ಅತಿವೃಷ್ಟಿಯಿಂದ ಮನೆ ಕಳೆದುಕೊಂಡವರಿಗೆ ಪರಿಹಾರ ನೀಡುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

264 (363) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ರಾಜ್ಯದಲ್ಲಿ ಆಗಸ್ಟ 2019ರಲ್ಲಿ ಉಂಟಾದ ಭಾರಿ ಮಳೆ (ಅತಿವೃಷ್ಟಿ)ಯಿಂದ ಹಾನಿಗೊಳಗಾದ ಮನೆಗಳ ಮರುನಿರ್ಮಾಣಕ್ಕೆ ಪರಿಹಾರ ಒದಗಿಸುವಲ್ಲಿ ನಡೆದಿರುವ ಲೋಪದೋಷಗಳಿಂದಾಗಿ ಬಾಕಿ ಉಳಿದ ಅರ್ಹ ಫಲಾನುಭವಿಗಳು ನಿರಾಶ್ರಿತರಾಗಿ ಪರಿಹಾರಕ್ಕಾಗಿ ಅಲೆದಾಡುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ಬಾಕಿ ಉಳಿದ ನಿರಾಶ್ರಿತ ಅರ್ಹ ಫಲಾನುಭವಿಗಳಿಗೆ ಪರಿಹಾರ ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ಒದಗಿಸುವುದು)

(ಇ) ಭಾರಿ ಪ್ರವಾಹದಿಂದ ಮನೆ ಕಳೆದುಕೊಂಡು ನೊಂದ ಅರ್ಹ ಫಲಾನುಭವಿಗಳು ಪರಿಹಾರಕ್ಕಾಗಿ ಜಿಲ್ಲಾಧಿಕಾರಿಗಳ ಕಛೇರಿ ಮುಂದೆ ಧರಣಿ ನಡೆಸಿದ್ದರೂ ಪರಿಹಾರ ಒದಗಿಸದೇ ಬಾಕಿ ಉಳಿಯಲು ಕಾರಣಗಳೇನು ; ಈ ಲೋಪದೋಷಗಳನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಈ) ಕೆಲವು ಕಾರಣಾಂತರಗಳಿಂದ ನೊಂದ ಅರ್ಹ ಫಲಾನುಭವಿಗಳ ಬಾಕಿ ಉಳಿದ ಪರಿಹಾರಕ್ಕಾಗಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿದ್ದರೂ ಅವರಿಗೆ ಪರಿಹಾರ ಒದಗಿಸಲು ವಿಳಂಬ ಧೋರಣೆ ತಾಳಲು ಕಾರಣಗಳೇನು ;

(ಉ) ಬಾಕಿ ಉಳಿದ ನೊಂದ ಅರ್ಹ ಫಲಾನುಭವಿಗಳಿಗೆ ಯಾವ ಕಾಲಮಿತಿಯಲ್ಲಿ ಪರಿಹಾರ ಒದಗಿಸಲಾಗುವುದು ?